# ಒಳಗೊಳ್ಳುವಿಕೆ: ಒಂದು ಮೂಲಭೂತ ಹಕ್ಕು

ಅಡಿವೆಪ್ಪ ಕುರಿ



ಅವನ ಹೆಸರನ್ನು ಕೂಗಿದ ತಕ್ಷಣ ಎಲ್ಲೇ ಇದ್ದರೂ ಶಿಕ್ಷಕರೆದುರು ಹಾಜರಾಗಲು ಓಡಿ ಬರುತ್ತಾನೆ ಮಾಧವ. ಪ್ರತಿಯೊಂದು ಕೆಲಸಕ್ಕೂ ಅವನನ್ನೇ ಕರೆಯಲು ಶಿಕ್ಷಕರೂ ಇಷ್ಟಪಡುತ್ತಾರೆ. ಅವನಿಗೆ ನಿರರ್ಗಳವಾಗಿ ಮಾತನಾಡಲು ಆಗುವುದಿಲ್ಲ. ಓದುವ, ಬರೆಯುವ ನೈಪುಣ್ಯವೂ ಇಲ್ಲ. ಆದರೂ ಆತ ಇಡೀ ಶಾಲೆಗೇ ಮುಂದಾಳು.

ಒಂದನೇ ತರಗತಿಗೆ ದಾಖಲಾತಿ ಪಡೆದ ಸಮಯದಲ್ಲಿ ತನ್ನ ದೈನಂದಿನ ಕೆಲಸಕಾರ್ಯಗಳನ್ನೂ ಮಾಡಲು ಹೆಣಗಾಡುತ್ತಿದ್ದ ಈ ಮಗು, ಇಂದು ತನ್ನೆಲ್ಲ ಕೆಲಸಗಳನ್ನು ತಾನೇ ಮಾಡಿ-ಕೊಳ್ಳುವುದಲ್ಲದೇ ಇನ್ನಿತರ ಯಾವುದೇ ಮಗುವಿನಂತೆ ಎಲ್ಲರೊಂದಿಗೂ ಮುಕ್ತವಾಗಿ ಬೆರೆಯುತ್ತದೆ. ಶಾಲೆಗೆ ಭೇಟಿನೀಡುವ ಜನರೊಂದಿಗೆ ಮುಖಕ್ಕೆ ಮುಖ ಕೊಟ್ಟು ಮಾತನಾಡುವ ಆತ್ಮವಿಶ್ವಾಸವನ್ನು ಈಗ ಮಾಧವ ಹೊಂದಿದ್ದಾನೆ.ಒಳಗೊಳ್ಳುವಿಕೆಯ ಮೂಲಕ ಪರಿವರ್ತನೆ

ವಿಶೇಷ ಅಗತ್ಯವನ್ನುಳ್ಳ ಮಗು ಮಾಧವನ ಪರಿವರ್ತನೆಯಾಗಿದ್ದು ಅವನ ಶಿಕ್ಷಕರ ಪ್ರೀತಿ, ಮಮತೆಗಳಿಂದ ಮತ್ತು ಅವರು ಅವನಿಗೆ ಒದಗಿಸಿದ ಅವಕಾಶಗಳಿಂದ. ಸಮರ್ಥ ನಿರ್ವಹಣೆಗೆ ಸೂಕ್ತ ಅವಕಾಶ ಹಾಗು ನೆರವನ್ನು ಒದಗಿಸಿದರೆ, ಪ್ರತಿಯೊಂದು ಮಗುವಿನ ಒಳಗೊಳ್ಳುವಿಕೆಯೂ ಸಾಧ್ಯ ಮತ್ತು ಅನುಕಂಪಕ್ಕಿಂತಲೂ ಹೆಚ್ಚಾಗಿ ಈ ಅವಕಾಶಗಳನ್ನು ಪಡೆಯುವುದು ಅವರ ಹಕ್ಕು ಎನ್ನುವುದಕ್ಕೆ ಇದೊಂದು ಪುರಾವೆಯೂ ಆಗಿದೆ. ಕಲಿಕೆ ಮತ್ತು ದೈಹಿಕ ನ್ಯೂನತೆಗಳಿರುವ ಮಕ್ಕಳಿಗೆ, ಸಹಾನುಭೂತಿಯಷ್ಟೇ ಸಾಕಾಗುವುದಿಲ್ಲ, ಅವರಿಗೆ ಬೆಳೆಯಲು ಅವಕಾಶವನ್ನು ಒದಗಿಸಿಕೊಡಬೇಕು. ಅವರ ಕಲಿಕೆಗೆ ನೆರವಾಗುವಂತೆ ಸುದೀರ್ಘ ಕಾಲ ಅವರನ್ನು ತಾಳ್ಮೆ, ಪ್ರೀತಿ ಮತ್ತು ಗೌರವದಿಂದ ನಡೆಸಿ-ಕೊಳ್ಳಬೇಕು. ಇದು ಸಂವಿಧಾನದಲ್ಲಿ ನೀಡಿದಂತೆ ಅವರ ಸಮಾನತೆಯ ಮತ್ತು ನ್ಯಾಯದ ಹಕ್ಕಿನ ಭಾಗವೂ ಆತದೆ.

ಕೆಲವು ವರ್ಷಗಳ ಹಿಂದೆ, ನಾವು ಸುರಪುರದಲ್ಲಿ ನ್ಯೂನತೆಗಳಿರುವ ಮಕ್ಕಳಿಗೆ ಒಂದು ಮೇಳವನ್ನು ಏರ್ಪಡಿಸಿದ್ದೆವು. ಅದನ್ನು ಯಶಸ್ವಿಗೊಳಿಸಲು ನಮ್ಮ ತಂಡವು ಎರಡು ತಿಂಗಳುಗಳ ಕಾಲ ತುಂಬ ಶ್ರಮವಹಿಸಿತ್ತು. ಸಮಾರಂಭದ ದಿನ ಪ್ರತಿಯೊಂದು ಮಗುವೂ ತನಗೆ ನೀಡಲಾದ ವಿಷಯವನ್ನು ಪ್ರಸ್ತುತಪಡಿಸಿದ ರೀತಿಗೆ ಶಿಕ್ಷಕರು ಮತ್ತು ಪೋಷಕರು ದಂಗಾಗಿಬಿಟ್ಟರು. ಮಕ್ಕಳಿಗೆ ಅಗಾಧ ಪ್ರೀತಿ ತೋರಿ, ಅವರ ಕಾರ್ಯವನ್ನು ಪ್ರಶಂಸಿಸಿದರು. ವರ್ಣಿಸಲಾಗದ ಏನೋ ಸಾಧನೆಯನ್ನು ಮಾಡಿದ ಅನುಭವ ನಮಗಾಯಿತು. ಮಕ್ಕಳು, ನಮ್ಮ ಬಗ್ಗೆಯೇ ನಮಗೆ ಹೆಮ್ಮೆಯಾಗು-ವಂತೆ ಮಾಡಿದ್ದರು!

ವಿಶೇಷ ಅಗತ್ಯಗಳಿರುವ ಮಕ್ಕಳು ಕುಟುಂಬ ಮತ್ತು ಸಮಾಜಕ್ಕೆ ಹೊರೆ ಎನ್ನುವ ಮನೋಭಾವ ಇನ್ನೂ ನಮ್ಮಲ್ಲಿ ಇದೆ. ಅವರಲ್ಲಿರುವ ಭಿನ್ನತೆಗಳನ್ನು ನೋಡುವುದಕ್ಕಿಂತ, ಅವರ ಶಿಕ್ಷಣದ ಹಕ್ಕನ್ನು ನಮ್ಮ ವ್ಯವಸ್ಥೆಯೊಳಗೇ ಅವರು ಪಡೆದುಕೊಳ್ಳುವಂತೆ ಮಾಡಲು ಹೇಗೆ ಸಾಧ್ಯ ಎನ್ನುವುದನ್ನು ನಾವು ಶೋಧಿಸಬೇಕಿದೆ. ಶಿಕ್ಷಕರು ಮನಸ್ಸು ಮಾಡಿದರೆ, ಪ್ರತಿಯೊಂದು ಮಗುವೂ ಉತ್ತಮ ಶಿಕ್ಷಣ ಪಡೆಯಬಹುದು ಎನ್ನುವುದು ನನ್ನ ನಂಬಿಕೆ. ನ್ಯೂನತೆಗಳಿರುವ 7 ವರ್ಷದ ಬೇರೊಂದು ಮಗುವಿನ ಪೋಷಕರು ಮಾಧವನ ಪ್ರಗತಿಯ ಬಗ್ಗೆ ತಿಳಿದು ತಮ್ಮ ಮಗಳನ್ನೂ ಅದೇ ಶಾಲೆಗೆ ಸೇರಿಸಿದರು. ಈಗ ಆ ಮಗುವೂ ತನ್ನ ದೈನಂದಿನ ಕೆಲಸಕಾರ್ಯಗಳನ್ನು ಸ್ವತಂತ್ರವಾಗಿ ಮಾಡಿಕೊಳ್ಳುವಷ್ಟು ಸಾಮರ್ಥ್ಯವನ್ನು ಪಡೆದಿದೆ ಮತ್ತು ಅವಳ ಪೋಷಕರಿಗೆ ಈ ಪರಿವರ್ತನೆಯಿಂದ ತುಂಬಾ ಸಂತೋಷವಾಗಿದೆ.

**ವಿಭಿನ್ನ ಸಾಮಾಜಿಕ ಗುಂಪುಗಳು**

ವಿಭಿನ್ನ ಸಾಮಾಜಿಕ ಹಿನ್ನೆಲೆಯನ್ನುಳ್ಳ ಮಕ್ಕಳು ಶಾದಿಮಹಲ್‌ನ (ಮುದಗಲ್, ಅಂಗಸಗೂರು ವಲಯ, ರಾಯಚೂರು ಜಿಲ್ಲೆ) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಬರುತ್ತಾರೆ. ಸದ್ಯ ಈ ಶಾಲೆಯಲ್ಲಿ 42 ಮಕ್ಕಳು ಕಲಿಯುತ್ತಿದ್ದಾರೆ. ಅವರ ಮಾತೃಭಾಷೆ ಬೇರೆಬೇರೆಯಾಗಿದ್ದು, ಹದಿನೆಂಟು ಮಕ್ಕಳು ತೆಲುಗು, ಐವರು ಮರಾಠಿ, ಎಂಟು ಜನ ಉರ್ದು ಮಾತನಾಡುತ್ತಾರೆ. ಒಂದು ಮಗುವಿನ ತಾಯ್ನುಡಿ ಕುಂಚಟ (ಕುಂಚಿಕೊರವರ ಭಾಷೆ). ಉಳಿದ ಮಕ್ಕಳ ತಾಯ್ನುಡಿ ಕನ್ನಡ. ಈ ಮಕ್ಕಳ ಪೋಷಕರು ನಾಟಕ ಕಲಾವಿದರು (ಹಗಲು ವೇಷಗಾರರು), ಕಲ್ಲುಕುಟಿಗರು, ಬುಟ್ಟಿ ನೇಯುವವರು, ಬಳೆ ಮಾರುವವರು, ಸಣ್ಣಪುಟ್ಟ ಪಾತ್ರೆಗಳನ್ನು ಮಾರಾಟ ಮಾಡುವವರು. ಕೆಲವು ಪೋಷಕರಂತೂ ಜೀವನೋಪಾಯಕ್ಕಾಗಿ ಭಿಕ್ಷಾಟನೆಯನ್ನೂ ಮಾಡುತ್ತಾರೆ. ಅಂಥವರು ಜೋಪಡಿಗಳಲ್ಲಿ ವಾಸಿಸುತ್ತಾರೆ. ಈ ಮಕ್ಕಳಲ್ಲಿ ಕೆಲವರು ಶಾಲೆ ಮುಗಿದ ಮೇಲೆ ಭಿಕ್ಷಾಟನೆಗೂ ಹೋಗುತ್ತಾರೆ. ಕನ್ನಡವು ಮಾತೃಭಾಷೆಯಲ್ಲದ ಮಕ್ಕಳೂ ಕೂಡ ಚೆನ್ನಾಗಿ ಕನ್ನಡ ಮಾತನಾಡುತ್ತಾರೆ. ಏಕೆಂದರೆ ಕನ್ನಡವು ಅವರ ಅನ್ನದ ಭಾಷೆಯೂ ಆಗಿದೆ. ಆದರೂ, ಶಿಕ್ಷಕರು ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಮನೋಭಾವ ಹೊಂದಿರುವುದರಿಂದ ಇಂತಹ ವಿಭಿನ್ನ ಸಾಮಾಜಿಕ ಹಿನ್ನೆಲೆಗಳಿಂದ ಬಂದ ಮಕ್ಕಳು ಯಾವುದೇ ತರಹದ ಕೀಳರಿಮೆಯನ್ನು ಹೊಂದಿಲ್ಲ. ಅವರು ಪರಸ್ಪರ ಹೇಗೆ ಮುಕ್ತವಾಗಿ ಆಟವಾಡುತ್ತಾರೆ, ಆಹಾರವನ್ನು ಹಂಚಿಕೊಳ್ಳುತ್ತಾರೆ, ಒಟ್ಟಾಗಿ ಕೆಲಸ ಮಾಡುತ್ತಾರೆ ಹಾಗು ಒಬ್ಬರಿಗೊಬ್ಬರು ನೆರವಾಗುತ್ತಾರೆ ಎನ್ನುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಶಿಕ್ಷಕರಿಗೆ ಮಕ್ಕಳ ಮೇಲೆ ಪ್ರೀತಿ ಮತ್ತು ಸಹಾನುಭೂತಿಯಿದೆ.

**ಶಿಕ್ಷಕರ ಪಾತ್ರ**

ಶಾಲೆಯಲ್ಲಿ ಮಕ್ಕಳು ಒಂದನೆಯ ತರಗತಿಗೆ ದಾಖಲಾತಿ ಪಡೆದಾಗ, ಶಾಲಾ ಪ್ರಕ್ರಿಯೆಗಳಿಗೆ ಹೊಂದಿಕೊಳ್ಳಲು ಅವರಿಗೆ ಕಷ್ಟವಾಗುತ್ತದೆ. ಅವರು ಆಗಾಗ ಹೊರಗೆ ಹೋಗಲು ಬಯಸುತ್ತಾರೆ ಮತ್ತು ಇತರ ಮಕ್ಕಳೊಂದಿಗೆ ಮುಕ್ತವಾಗಿ ಬೆರೆಯಲು ಹಿಂಜರಿಯುತ್ತಾರೆ. ಶಿಕ್ಷಕಿಯರಲ್ಲೊಬ್ಬರಾದ ಪ್ರಮೀಳಾ, ಮಕ್ಕಳ ಬದುಕಿನ ರೀತಿಯನ್ನು ಗೌರವಿಸುವುದರ ಜೊತೆಗೆ, ಶಾಲಾ ಅವಧಿಯಲ್ಲಿ ಕೆಲ ಸಮಯದ

ಮಟ್ಟಿಗೆ ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಗಳೊಡನೆ ಒಡನಾಡಲು ಅನುವು ಮಾಡಿಕೊಡುತ್ತಾರೆ. ಶಿಕ್ಷಕಿಯೂ ಮಕ್ಕಳು ಮಾತನಾಡುವ ಭಾಷೆಯಲ್ಲಿ ಸಂವಹಿಸಲು ತಿಳಿದಿರುವುದರಿಂದ, ಮಕ್ಕಳು ಅವರೊಂದಿಗೆ ತಮ್ಮ ಅನಿಸಿಕೆಗಳನ್ನು ಮುಕ್ತವಾಗಿ ಹಂಚಿಕೊಳ್ಳುತ್ತಾರೆ. ಹಾಡು, ಕಥೆಗಳನ್ನು ಹೇಳುವಂತೆ ಮಕ್ಕಳನ್ನು ಉತ್ತೇಜಿಸುತ್ತಾರೆ. ಮತ್ತು ಅವನ್ನು ತಮ್ಮ ದಿನನಿತ್ಯದ ಬದುಕಿನ ಸಂದರ್ಭದಲ್ಲಿಟ್ಟು ನೋಡಲು ನೆರವಾಗುತ್ತಾರೆ. ಮಕ್ಕಳು ತಮ್ಮ ಸಾಮಾಜಿಕ ಪರಿಸರದ ಕುರಿತಾಗಿ ಅದಾಗಲೇ ಹೊಂದಿರುವ ತಿಳುವಳಿಕೆಯನ್ನು ಅವರು ಚೆನ್ನಾಗಿ ಬಳಸಿಕೊಳ್ಳುವಂತೆ ಮಾಡುತ್ತಾರೆ. ಮಕ್ಕಳು ಮಾಡಿದ ಅತಿ ಸಣ್ಣ ಕೆಲಸವನ್ನೂ ಕೂಡ ಗುರುತಿಸಿ ಬೆನ್ನುತಟ್ಟುತ್ತಾರೆ. ಶಿಕ್ಷಕಿಯು ಅನುಸರಿಸುವ ಪ್ರಜಾತಾಂತ್ರಿಕ ವಿಧಾನದಿಂದಾಗಿ ಮಕ್ಕಳಿಗೆ ತಮಗೂ ಒಂದು ಬೆಲೆ ಸ್ವಮೌಲ್ಯವಿದೆ ಎಂಬ ಭಾವನೆ ಮೂಡುತ್ತದೆ. ಶಿಕ್ಷಕಿಯು ಪ್ರತಿಯೊಂದು ಮಗುವನ್ನೂ ಚೆನ್ನಾಗಿ ಬಲ್ಲರು, ಯಾವ ಮಗು ಏನನ್ನು, ಹೇಗೆ ಕಲಿಯುತ್ತದೆ ಎನ್ನುವುದನ್ನು ತಿಳಿದಿರುವವರು ಎಂಬುದು ಅವರೊಂದಿಗೆ ಮಾತನಾಡಿದಾಗ ಸ್ಪಷ್ಟವಾಗಿ ಅರಿವಿಗೆ ಬರುತ್ತದೆ.ಶಿಕ್ಷಕಿ ಪ್ರಮೀಳಾ ಅವರಿಗೆ ಈ ಮಕ್ಕಳ ಸಾಮರ್ಥ್ಯ ಏನು ಎನ್ನುವುದು ಗೊತ್ತು. ಅವರು ಮಕ್ಕಳ ನಿತ್ಯದ ಅನುಭವಕ್ಕೆ ಹೆಚ್ಚಿನದನ್ನು ಸೇರಿಸಲು ನಲಿ-ಕಲಿ ವಿಧಾನವನ್ನು ಬಳಸುತ್ತಾರೆ. ಅವರು ಮಕ್ಕಳಿಗೆ ಮಾತನಾಡಲು, ಪರಸ್ಪರ ಚರ್ಚಿಸಲು, ತಾವು ಮುಕ್ತವಾಗಿ ಅಭಿವ್ಯಕ್ತಿಸಲು ಅವಕಾಶವನ್ನು ನೀಡುತ್ತಾರೆ.

ಬಹುಪಾಲು ಮಕ್ಕಳು ಕಥೆ ಹೇಳುವುದು, ಚಿತ್ರ ರಚನೆ ಮತ್ತು ಜೇಡಿಮಣ್ಣಿನಿಂದ ಆಟಿಕೆ ತಯಾರಿಸುವುದನ್ನು ತುಂಬಾ ಇಷ್ಟಪಡುತ್ತಾರೆ. ಏಕೆಂದರೆ, ಇವರಲ್ಲಿ ಅನೇಕ ಮಕ್ಕಳು ಶಾಲೆಗೆ ಬರುವುದಕ್ಕಿಂತಲೂ ಮೊದಲೇ ಅಕ್ಕಪಕ್ಕದ ಹಳ್ಳಿಗಳಲ್ಲಿ ನಡೆಯುವ ಸ್ಥಳೀಯ ಸಂತೆ ಜಾತ್ರೆಗಳ ಸಂದರ್ಭದಲ್ಲಿ ತಮ್ಮ ತಂದೆ - ತಾಯಂದಿರೊಡನೆ ಆಟಿಕೆ, ಪಾತ್ರಗಳನ್ನು ಮಾರಿದ ಅನುಭವವನ್ನು ಹೊಂದಿದ್ದಾರೆ. ಆದ್ದರಿಂದ ಈ ಶಾಲೆಯ ಮಕ್ಕಳು ಪ್ರತೀ ವರ್ಷ ಆಯೋಜಿಸಲಾಗುವ ಪ್ರತಿಭಾ ಕಾರಂಜಿ ಕಾರ್ಯಕ್ರಮದಲ್ಲಿ ನಡೆಯುವ ಚಿತ್ರರಚನೆ ಮತ್ತು ಕಥೆ ಹೇಳುವ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ.ಒಟ್ಟಾರೆ ಹೇಳಬೇಕೆಂದರೆ, ಈ ಶಾಲೆಯಲ್ಲಿ ಮಕ್ಕಳು ಅಕ್ಷರ ಜ್ಞಾನವನ್ನು ಪಡೆದುಕೊಳ್ಳುವುದರ ಜೊತೆಗೆ ಬದುಕಿನ ಕುರಿತಾಗಿಯೂ ಕಲಿಯುತ್ತಾರೆ. ಮಕ್ಕಳು ಪ್ರತಿದಿನ ಶಾಲೆಗೆ ಸ್ವಇಚ್ಛೆಯಿಂದಲೇ ಬರುತ್ತಾರೆ. ಶಾಲೆಯು ಒಂದು ಕುಟುಂಬ-ದಂತೆಯೇ ಇದ್ದು ಕಲಿಕೆಯೆನ್ನುವುದು ಮಕ್ಕಳು ಶಾಲೆಯಲ್ಲಿ ಮಾಡುವ ಎಲ್ಲ ಕೆಲಸಕಾರ್ಯಗಳ ಭಾಗವೇ ಆಗಿದೆ. ಮಕ್ಕಳು ಮುಕ್ತವಾಗಿ ಮಾತನಾಡಬಲ್ಲರು, ಅವರ ಪ್ರತಿಭೆಗಳನ್ನು ಉತ್ತೇಜಿಸಲಾಗುತ್ತದೆ ಎನ್ನುವ ಸಂಗತಿಯು ಸಂವಿಧಾನದ ನೀತಿ-ನಿಯಮಗಳನ್ನು ಅನುಷ್ಠಾನಗೊಳಿಸಲು ಹಾಗು ಅದು ಪ್ರತಿಯೊಂದು ಶಾಲೆಯ ವಿಷಯದಲ್ಲಿಯೂ ವಾಸ್ತವವಾಗಲು ಸಾಧ್ಯ ಎನ್ನುವುದನ್ನು ತೋರಿಸುತ್ತದೆ.

* ಮಕ್ಕಳ ಗುರುತನ್ನು ರಕ್ಷಿಸಲು ಹೆಸರುಗಳನ್ನು ಬದಲಾಯಿಸಲಾಗಿದೆ.



**ಅಡಿವೆಪ್ಪ ಕುರಿ** ಅವರು ಕಳೆದ ಹತ್ತು ವರ್ಷಗಳಿಂದ ರಾಯಚೂರಿನ, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಬೆಂಗಳೂರಿನ ಡಿಎಸ್‌ಆರ್‌ಟಿಸಿ ಆಯೋಜಿಸಿದ ಗುರುಚೇತನ ಕಾರ್ಯಕ್ರಮಕ್ಕೆ ಇವರು ಬೆಂಬಲ ನೀಡಿದ್ದಾರೆ. ಅವರನ್ನು adiveppa.kuri@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಸಹನಾ ಹೆಗಡೆ** । ಪರಿಶೀಲನೆ: **ಚಂದ್ರಶೇಖರ ಮಂಡೆಕೋಲು**